ಒಂದಾಣೆ ಮಾಲೆ 214

ನಯಸೇನನ

# ಧರ್ಮಾಮೃತ ದರ್ಶನ

("ವಿದ್ವಾನ್" ಪರೀಕ್ಷಾರ್ಥಿಗಳಿಗಾಗಿ)



ಲೇಖಕರು:
ಶ್ರೀ| ಕೆ. ಎನ್. ಭಟ್, ಶಿರಾಡಿಪಾಲ್
ಮುಂಡಾಜೆ.



1958

ಬೆಲೆ: ಆಣೆ ಒಂದು.

ಒಂದಾಣೆ ಮಾಲೆ, ಮಂಗಳೂರು.

# ಲೇಖಕನ ಎರಡು ಮಾತು.

ನಯಸೇನನ "ಧರ್ಮಾಮೃತ"ದ ಮೂರು ಆಶ್ವಾಸಗಳು ಮದ್ರಾಸ್ "ಪ್ರಿಲಿಮಿನರಿ ವಿದ್ವಾನ್" ಪರೀಕ್ಷೆಗೆ ಪಠ್ಯವಾಗಿ ಇಡಲ್ಪಟ್ಟಿವೆ. ಆದರೆ, ಈ ಗ್ರಂಥವು ಈಗ ಸಿಕ್ಕುತ್ತಿಲ್ಲವಾದ ಕಾರಣ, ಯಾವುದಾದರೂ ಪುಸ್ತಕಾಲಯದಲ್ಲಿ ಹುಡುಕಿ ಪ್ರಯತ್ನಪಟ್ಟು ಸಂಪಾದಿಸಿಕೊಳ್ಳಬೇಕಾಗಿದೆ.

ನಾನು ನನ್ನ ಪರೀಕ್ಷಾ ಕಾಲದಲ್ಲಿ ಈ ಗ್ರಂಥವನ್ನು ಒಂದು ದೊಡ್ಡ ಪುಸ್ತಕಾಲಯದಿಂದ ಪಡೆದು ಪರೀಕ್ಷಾ ವಿಭಾಗಕ್ಕೆ ಬೇಕಾದ ಅಂಶಗಳನ್ನು ಸಂಗ್ರಹವಾಗಿ ಬರೆದುಕೊಂಡಿದ್ದೆ. ಆ ಬಳಿಕ, ನನ್ನ ಪರಿಚಿತರಾದ ಎಷ್ಟೋ ಮಂದಿ ಪರೀಕ್ಷಾರ್ಥಿಗಳು, ನಾನು ಬರೆದುಕೊಂಡಿದ್ದ ಈ ಸಂಗ್ರಹವನ್ನು ನೋಡಿಕೊಂಡೇ ಪರೀಕ್ಷೆಗೆ ಕುಳಿತು ಸಫಲರಾದುದನ್ನು ತಿಳಿದ ನನಗೆ, ಇದನ್ನು ಪ್ರಕಟಿಸಿದರೆ ಹೆಚ್ಚು ಮಂದಿ ಅಭ್ಯಾಸಿಗಳಿಗೆ ಉಪಕಾರವಾಗಬಹುದೆಂದು ತೋರಿದುದರಿಂದ, ಈ ಪ್ರಯತ್ನವನ್ನು ಕೈಕೊಂಡಿರುವುದಾಗಿದೆ.

ಅಭ್ಯಾಸಿಗಳಿಗೆ ಅತ್ಯಗತ್ಯವಾಗಿರುವ ಈ ಸಂಗ್ರಹ ಕೇವಲ ಒಂದಾಣೆಗೆ ಬಹಳ ಸುಲಭವಾಗಿ ದೊರೆಯುವಂತೆ, ಜನಪ್ರಿಯವಾಗಿರುವ ತಮ್ಮ "ಒಂದಾಣೆ ಮಾಲೆ"ಯ ಮೂಲಕ ಪ್ರಕಟಿಸಿ ಉಪಕರಿಸಿದ "ಪ್ರಭಾತ"ದ ಸಂಪಾದಕರಾದ ಶ್ರೀಮಾನ್ ಕುಡ್ಪಿ ವಾಸುದೇವ ಶೆಣೈಯವರಿಗೆ ಕೃತಜ್ಞತೆಗಳು ಸಲ್ಲಬೇಕಾಗಿವೆ.

ಪರೀಕ್ಷೆಗೆ ಸಂಬಂಧಪಟ್ಟ ಮೂರು ಆಶ್ವಾಸಗಳ ಕಥಾ ಪರಿಚಯವನ್ನೂ "ಧರ್ಮಾಮೃತ" ವಿಶೇಷತೆಗಳನ್ನೂ ಈ ಸಂಗ್ರಹದಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ. ಅಂತು, ಈ ಸಂಗ್ರಹದ ಮೂಲಕ ಅಭ್ಯಾಸಿಗಳು ಸತ್ಪ್ರಯೋಜನವನ್ನು ಹೊಂದಿದರೆ, ಈ ನನ್ನ ಪ್ರಯತ್ನ ಸಫಲವಾದಂತೆಯೇ ಸರಿ.

—ಕೆ. ಎನ್. ಭಟ್, ಶಿರಾಡಿಪಾಲ್.

▪▪▪▪▪▪▪▪▪

ನಯಸೇನನ

# ಧರ್ಮಾಮೃತ ದರ್ಶನ

("ವಿದ್ವಾನ್" ಪರೀಕ್ಷಾರ್ಥಿಗಳಿಗಾಗಿ)

.........

## ಕವಿ ಪರಿಚಯ

"ಧರ್ಮಾಮೃತ"ವು ೧೧೧೨ರಲ್ಲಿ, "ಸುಕವಿನಿಕರಪಿಕಮಾಕಂದ" "ವಾತ್ಸಲ್ಯ ರತ್ನಾಕರ" "ಸುಕವಿಜನಮನಃ ಪದ್ಮಿನೀ ರಾಜಹಂಸ" ಇತ್ಯಾದಿ ಬಿರುದಾಂಕಿತನಾದ ನಯಸೇನನಿಂದ ರಚಿಸಲ್ಪಟ್ಟಿತು. ಈ ಕವಿಯು ಧಾರವಾಡ ಜಿಲ್ಲೆಯ ಮುಳುಗುಂದ ಎಂಬ ಊರಿನಲ್ಲಿದ್ದವನೆಂದು ತಿಳಿದುಬರುತ್ತದೆ. "ನಯಸೇನ ಮುನೀಂದ್ರ" "ನಯಸೇನದೇವ" ಎಂಬುದಾಗಿ ಈತನು ತನ್ನ ನಾಮಾಂಕಿತದಲ್ಲಿ ಸೇರಿಸಿಕೊಂಡಿರುವುದರಿಂದ, ಈತನು ಸನ್ಯಾಸಿಯಾಗಿದ್ದನೆಂದು ವ್ಯಕ್ತವಾಗುತ್ತದೆ. ಈತನು ಒಂದು ವ್ಯಾಕರಣ ಗ್ರಂಥವನ್ನು ಬರೆದಿರುವನೆಂದು ಹೇಳಿಕೆಯಿದ್ದರೂ, ಅದು ದೊರೆತಿಲ್ಲ.

## "ಧರ್ಮಾಮೃತ"

ಈ ಗ್ರಂಥವು ಜೈನ ಧರ್ಮದರ್ಶನ ಗ್ರಂಥವಾಗಿದೆ. ಇದರಲ್ಲಿ ಜೈನ ಧರ್ಮದ ಅಷ್ಟಾಂಗಗಳು ಮತ್ತು ಪಂಚರತ್ನಗಳೆಂಬ ಐದು ಅಣುವ್ರತಗಳು ಉಲ್ಲೇಖಿಸಲ್ಪಟ್ಟಿವೆ. ಮೊದಲನೆಯದು ದರ್ಶನ ಕಥೆ. ಮತ್ತು ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ ಇವು ಅಷ್ಟಾಂಗಗಳು. ಕೊಲ್ಲದ, ಪುಸಿಯದ, ಕಳವಿನಿಸಿಲ್ಲದ, ಪರವನಿತೆಯರ್ಗೆ ಪದಪಿಂಚಿತ್ತಂ ಸಲ್ಲದ, ಪರಿಗ್ರಹಕ್ಕಳಿಪಿಲ್ಲದ, ಹೀಗೆ ಇವು ಐದು ಅಣುವ್ರತಗಳು. ಇಂತು ಹದಿನಾಲ್ಕು ಆಶ್ವಾಸಗಳಿಂದ ಶೋಭಿಸುವ ಈ ಗ್ರಂಥದಲ್ಲಿ, ಪ್ರತಿಯೊಂದು ಆಶ್ವಾಸದಲ್ಲೂ ಜೈನ ಧರ್ಮದ ಮೇಲೆ ಪೂರ್ಣ ಶ್ರದ್ಧೆ ಭಕ್ತಿಯುಳ್ಳ ಧರ್ಮಾತ್ಮರ ಕಥೆಗಳಿವೆ.

ಧರ್ಮಶ್ರದ್ಧೆಯಿಲ್ಲದವರು ಧರ್ಮಸಂಕಟಕ್ಕೆ ಸಿಲುಕಿ, ತೊಳಲಾಡಿ, ಕೊನೆಗೆ ಸ್ವಸಂತೋಷದಿಂದಲೇ ಜೈನಧರ್ಮವನ್ನು ಸ್ವೀಕರಿಸಿ, ಆಚರಿಸುತ್ತ ಮೋಕ್ಷವನ್ನು ಪಡೆವ ವಿವರಣೆಗಳಿರುವ ಕಥೆಗಳಿವೆ. ಕೆಲವು ಕಥೆಗಳಲ್ಲಿ ಸ್ವಮತ ಪ್ರಸಾರಣಕ್ಕಾಗಿ ಪರಮತವಿಡಂಬನೆ ಉದ್ದಕ್ಕೂ ಬೆಳೆದು ಬಂದಿದೆ. ಇಂತಿದು, "ಧರ್ಮಾಮೃತ"ವೆಂಬ ತನ್ನ ನಾಮಸಾರ್ಥಕತೆಯನ್ನು ಪಡೆದಿದೆ.

## ನಯಸೇನನ ಭಾಷಾಪ್ರೇಮ

ಕವಿಕೇಸರಿಗಳೆನಿಸಿದ ಜನ್ನ, ಪೊನ್ನ, ರನ್ನರಂತೆ ನಯಸೇನನು ಸಂಸ್ಕೃತದ ಪ್ರಭಾವಕ್ಕೆ ಒಳಪಟ್ಟವನಲ್ಲ. "ಕಬ್ಬಿಗರ ಕಾವ"ವನ್ನು ಬರೆದ ಕನ್ನಡ ಪ್ರೇಮಿಯಾದ ಕವಿ ಆಂಡಯ್ಯನಂತೆ, ಈತನೂ ಕೂಡ ಕನ್ನಡದ ಕುರಿತು ಬಹಳ ಅಭಿಮಾನವುಳ್ಳ ಕವಿಯಾಗಿದ್ದುದರಿಂದಲೇ ತನ್ನ ಗ್ರಂಥದಲ್ಲಿ ಹೀಗೆ ಹೇಳಿಕೊಂಡಿದ್ದಾನೆ—"ಸಕ್ಕದಮಂ ಪೇಳ್ವೊಡೆ ನೆರೆ

ಸಕ್ಕದಮಂ ಪೇಳ್ಗೆ ಸುದ್ದ ಕನ್ನಡದೊಳ್ ತಂ
ದಿಕ್ಕುವುದೆ ಸಕ್ಕದಮಂ?
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ"

ಸಂಸ್ಕೃತ–ಕನ್ನಡ ಪದಗಳನ್ನು ಬೆರಕೆಮಾಡಿ ಏಕೆ ಕಾವ್ಯರಚನೆ ಮಾಡಬೇಕು? ಕನ್ನಡದಲ್ಲಾದರೆ, ಅದರಲ್ಲೇ—ಸಂಸ್ಕೃತದಲ್ಲಾದರೆ ಸಂಸ್ಕೃತದಲ್ಲೇ ಕಾವ್ಯರಚನೆ ಮಾಡಬೇಕು. ತುಪ್ಪವನ್ನೂ ತೈಲವನ್ನೂ ಬೆರಸಿದೊಡೇನು ಸೊಗಸು? ಎಂದು ಪ್ರಶ್ನಿಸಿರುವನಾದರೂ, ತನಗೆ ಸಂಸ್ಕೃತದ ವಿಚಾರದಲ್ಲಿ ಅನಾದರವಿಲ್ಲವೆಂಬುದನ್ನು ಸೂಚಿಸಲು ನಿದರ್ಶನವೆಂಬಂತೆ, "ಘೃತ, ತೈಲ"ವೆಂಬೆರಡು ಸಂಸ್ಕೃತ ಪದಗಳನ್ನೂ ಈತನು ಉಪಯೋಗಿಸಿರುವನು.

ಕಾವ್ಯರಚನೆಯ ವಿಚಾರದಲ್ಲಿ ಕವಿ ಏನು ಹೇಳಿದ್ದಾನೆ?

"ರಸಭಾವಂ ಗಮಕಂ ಕಾ
ಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ।
ಕುಸುಮಿಯ ಬಗೆಯಿಂದಿನಿಸಿರೊ
ಳಿಸೆಯದ ಕೃತಿ ಕೃತಿಯೇ? ಬಗೆದು ನೋಳ್ಪೊಡೆ ಜಗದೊಳ್॥

ರಸಪೂರ್ಣವಾದ, ಅರ್ಥಗರ್ಭಿತವಾದ ನಾಣ್ನುಡಿಗಳೂ ಜನಸಾಮಾನ್ಯರಿಗೆ ಪರಿಚಿತವಾಗಿರುವಂತಹ ಗ್ರಾಮ್ಯ ಶಬ್ದಪ್ರಯೋಗಗಳೂ ಕಂಡುಬರುವ ಹೊಸ ಹಾದಿಯಲ್ಲಿ ಸಾಗಿರುವ, ಅಂದರೆ ಚಲೋದಾದ ಕಸೂತಿಯ ಕೆಲಸವನ್ನು ನಾಜೂಕಾಗಿ ಮಾಡಿರುವಂತೆ, ಹೃದಯಸ್ಪರ್ಶಿಯಾಗಿ, ಭಾವಪ್ರಚೋದನೆ ಮಾಡಬಲ್ಲ ಕೃತಿಯೇ ಜನಪ್ರಿಯವಾಗಿ ಸಾರ್ಥಕವಾಗಬಲ್ಲುದೇ ಹೊರತು, ವಿಮರ್ಶಿಸಿ ನೋಡಿದರೆ, ಇದಕ್ಕೆ ಹೊರತಾದ ಕಾವ್ಯವು ಈ ಜಗತ್ತಿನಲ್ಲಿ ಕಾವ್ಯಕೃತಿಯೆಂದು ಹೇಳಿಸಿಕೊಳ್ಳಲು, ಸಮರ್ಥವಾಗಬಹುದೇ? ಎಂಬುದಾಗಿ ಹೇಳಿ, "ನಾಣ್ನುಡಿಗಳ ತವರ್ಮನೆ"ಯಂತಿರುವ, ತನ್ನ ಗ್ರಂಥದ ವಿಶಿಷ್ಟತೆಯನ್ನು ಈ ಕವಿಯು, ಹಲವು ಉದಾಹರಣೆಗಳಿಂದ ಸಮರ್ಥಿಸಿರುವನು. ತನ್ನ ಈ ಹೊಸ ಪಂಥಕ್ಕೆ ಮೆಚ್ಚದವರು ಯಾರಾದರೂ ಇದ್ದರೆ, ಅಂಥವರ ಕುರಿತಾಗಿಯೂ ನಯಸೇನನು ಬಹು ಸ್ವಾರಸ್ಯವಾಗಿ ನುಡಿದಿರುವನು.—

"ಮಳೆಯಿಲ್ಲದೆ ಪೊಯ್ನೀರಿಂ
ಬೆಳೆಗುಮೆ ಧರೆ ಮರುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇಳ್ದೊಡಮದು ಕೋ
ಮಳಮಕ್ಕುಮೋ ಸಹಜವಿಲ್ಲದಾತನ ಕಬ್ಬಂ?

ಮಳೆಯಿಲ್ಲದೆ ಕೇವಲ ಹೊಯ್ದ ನೀರಿನಿಂದ ಈ ಧರೆಯ ಸಸ್ಯಸಂಪತ್ತು ಬೆಳೆದು, ಹಚ್ಚಹಸುರಾಗಿ ಹೇಗೆ ಬೆಳಗಲಾರದೋ ಹಾಗೆಯೇ, ಸಹಜತೆಯಿಲ್ಲದ, ಕೇವಲ ಶಾಸ್ತ್ರಜ್ಞಾನ ಪಾಂಡಿತ್ಯದ ಗರ್ವದಿಂದ ರಚಿಸಿದ ಕಾವ್ಯವೂ ಬೆಳಗಿ ಬಾಳಲಾರದು. ಅಂದರೆ, ಸಹಜತೆಯಿಲ್ಲದ ಕಾವ್ಯವದು ಹೇಗೆ ಉತ್ತಮ ಕಾವ್ಯವಾಗಬಲ್ಲುದು? ಎಂದು ಕೇಳುತ್ತ, ತನ್ನ ಕಾವ್ಯದಲ್ಲಿ ಸಹಜತೆಯಿದೆ ಎಂಬುದನ್ನು ವ್ಯಕ್ತಪಡಿಸಿರುವನು.

ನವಿಲಿನ ಕುಣಿತವದು, ವಿವೇಕಿಯಾದ ರಸಿಕನಿಗೆ ರುಚಿಸಬಹುದೇ ಹೊರತು, ಅವಿವೇಕಿಯಾದ ಅರಸಿಕನಿಗೆ ಅದೆಂತು ರುಚಿಸೀತು? ಸುಕವಿಯ ಪ್ರತಿಭೆ, ಪದಪ್ರಯೋಗ, ಭಾವ, ರಸಾದಿಗಳ ಜಾಣ್ಮೆಯನ್ನರಿತು ಆನಂದಿಸಬೇಕಿದ್ದರೆ, ಯಾವನಾದರೂ ಸತ್ಕವಿಯೇ ಅದಕ್ಕೆ ಸಮರ್ಥನು ಎಂದಿದ್ದಾನೆ, ನಯಸೇನ! ಕವಿಯ ಈ ಮಾತುಗಳಲ್ಲಿ ಎಷ್ಟು ಸಹಜತೆಯಿದೆ! ಮತ್ತೂ ಹೇಳುತ್ತಾನೆ—

"ಉಪ್ಪಿಲ್ಲದೆ ಕೇಳೊಕ್ಕಳ
ತುಪ್ಪವನೆರೆದುಣ್ಬೆನೆಂಬೊಡುಂಬುಣಿಸೇಂ ಸ್ವಾ
ದಪ್ಪುದೇ? ಸಹಜಂ ತನಗಿನಿ
ಸಪ್ಪೊಡವಿಲ್ಲದನ ಕವಿತೆ ರುಚಿವಡೆದಪುದೇ? ॥

ಉಪ್ಪಿನ ಸ್ಪರ್ಶವೇ ಇಲ್ಲದೆ, ಬೇಕಾದಷ್ಟು ತುಪ್ಪವನ್ನೇ ಎರೆದುಕೊಂಡು, ಹೊಟ್ಟೆ ತುಂಬ ಊಟಮಾಡುವೆನೆಂದರೆ, ಅಂತಹ ಆ ಊಟದಲ್ಲಿ ಏನಿದೆ ರುಚಿ? "ಉಪ್ಪಿಗಿಂತ ರುಚಿಯಿಲ್ಲ! ತಾಯಿಗಿಂತ ಬಂಧುವಿಲ್ಲ!" ಎಂಬಂತೆ, ನೈಜವಾದ ದಿವ್ಯಭಾವನೆಗಳಿಲ್ಲದ ಕವಿತೆಯದು, ಹೇಗೆ ಆನಂದಕರವಾದೀತು? ಅದರಿಂದ ಎಂತಹ ಫಲ ದೊರಕೀತು? ಎಂದು ಕೇಳಿದ್ದಾನೆ, ವಾತ್ಸಲ್ಯ ರತ್ನಾಕರ.

## ನಿಂದಿಸುವವರ ಕುರಿತು, ಈ ಕವಿ ಏನು ಹೇಳಿರುವನು?

ನಿಂದೆಮಾಡುವವರ ಕುರಿತಾಗಿ ಹಿಂದಿನ ಕವಿಗಳನೇಕರು ಅನೇಕ ವಿಧವಾಗಿ ಹೇಳಿರುವರು. ಕಬೀರನು—"ನಿಂದೆಮಾಡುವವರನ್ನು ಬಹಳ ಸಮೀಪದಲ್ಲೇ ಮನೆಯಂಗಳದಲ್ಲೇ ಮನೆ ಕಟ್ಟಿಸಿಕೊಟ್ಟು ನಿಲ್ಲಿಸಿಕೊಳ್ಳಿರಿ!" ಎಂದು ಹೇಳಿರುವನಾದರೆ, ಕವಿ ರಾಘವಾಂಕನು—

"ಎಡವಾಯ್ದು ಬಂದ ತಪ್ಪಂ ಪಿಡಿದು ಸಾಧಿಸುತ
ಕಡೆತನಕ ಬಂದ ಲೇಸಂ ಮರೆವ ನೀಚರೆದೆ
ಹೊಡೆಯದೇ! ಬೇನೆಯರಿಯದ ನೀರಸರನೇಕೆ
ಪುಟ್ಟಿಸಿದನಬುಜಭವನು" ಎಂದು

ಬಹಳ ಕಟುವಾಗಿ ನುಡಿದಿರುವನು. ಆದರೆ, ನಯಸೇನನ ರೀತಿಯೇ ಬೇರೆ. ಈತನು ಬಹು ನಯವಾಗಿ—

"ಇಲಿ ಮರಕುಕ್ಕುಟಮಕ್ಕಿಗ
ಮಲಸದೆ, ಶಾರ್ದೂಲಕುತ್ತೆ ಕಡಿಯುತಿರ್ಪುದೆ ಸಹಜಂ।
ಸಲೆಚಪಲಂಗಂ ಕುಕವಿಗ
ಮಲಸವೆ ತೆಗಳ್ವುದುಮೆ ಸಹಜಮುವರಂತೆಕರಂ ॥"

ಅಂದರೆ, ಒಳ್ಳೆಯ ಮರವಾಗಲೀ ಹಾಳು ಮರವಾಗಲಿ, ಅದನ್ನು, ಕುಟುಕುತ್ತ ಕೆದಕುವ ಕೆಲಸ, ಮರಕುಕ್ಕುವ ಹಕ್ಕಿಗೆ; ಮತ್ತು ಹಳಸಿದ ಪದಾರ್ಥವಾಗಲಿ ಉತ್ತಮವಾದ ವಸ್ತುವೇ ಆಗಿರಲಿ, ಅದರ ವಿವೇಚನೆಯಿಲ್ಲದೆ, ಕೆದಕುತ್ತ ಚೆಲ್ಲಾಪಿಲ್ಲಿಯಾಗಿ ಮಾಡುವ ಕೆಲಸ ಇಲಿ–ಹೆಗ್ಗಣಗಳಿಗೆ ಸ್ವಭಾವಸಿದ್ಧವಾದ ಗುಣವಾಗಿರುವಂತೆ, ಜಿಹ್ವಾಚಾಪಲ್ಯವುಳ್ಳ ಅಜ್ಞಾನಿಗಳಿಗೂ, ಕುಕವಿಗಳಿಗೂ, ಯೋಗ್ಯ–ಅಯೋಗ್ಯ, ಉತ್ತಮ–ಅನುತ್ತಮವೆಂಬುದರ ಪರಿವೆಯಿಲ್ಲ! ಇತರರ ಕಾವ್ಯಗಳನ್ನು ನಿಂದಿಸುವುದರಲ್ಲಿ ಅಂಥವರಿಗೆ ಆಲಸ್ಯವಿಲ್ಲ! ಅದು ಅವರ ಹುಟ್ಟುಗುಣ. "ಹುಟ್ಟುಗುಣ ಸುಟ್ಟರೂ ಬಿಡದು" ಎಂಬ ಗಾದೆಯಂತೆ, ಅಂಥವರು ನಿಂದಿಸುವುದರಿಂದ, ಸತ್ಕವಿಯೋರ್ವನ ಕಾವ್ಯವು ನಿಷ್ಪ್ರಯೋಜಕವಾಗುವ ಭಯ ಎಂದಿಗೂ ಇಲ್ಲ!—ಎಂಬ ವಿಚಾರವನ್ನು ನಯಸೇನನು ಈ ಮೂಲಕ ಸ್ಪಷ್ಟಪಡಿಸಿರುವನು.

## ಧರ್ಮಾಮೃತದ ಇತರ ವಿಶೇಷತೆಗಳು!

ಧರ್ಮದ ಸ್ವರೂಪವೇನು? ಎಂಬುದಕ್ಕೆ ನಯಸೇನನು, ಮುನಿಗಳೊಬ್ಬರ ಮೂಲಕ, ಅದರ ಸ್ವರೂಪದರ್ಶನ ಮಾಡಿಸುತ್ತಾನೆ. ಮುಕ್ತಿಮಾರ್ಗವಾವುದು? ಅದನ್ನು ಕಾಣುವ ಬಗೆಯೆಂತು? ಎಂಬೀ ವಿಚಾರಗಳ ಸಮರ್ಥನೆಗಾಗಿ, ನಯಸೇನನು ಇಲ್ಲಿ ನಾಣ್ನುಡಿಗಳ ಸುರಿಮಳೆಯನ್ನೇ ಸುರಿಸಿದ್ದಾನೆ:

'ನರಕಸದೃಶವಾದೀ ದುಃಖಮಯ ಸಂಸಾರದಿಂದ ನಿವೃತ್ತನಾಗಿ ಶಾಶ್ವತ ಸೌಖ್ಯಮಂ ಪಡೆವ ಮುಕ್ತಿಮಾರ್ಗವಾವುದು?' ಎಂಬ ಪ್ರಶ್ನೆಗೆ— 'ತ್ರಿಜಗನ್ಮಾಂಗಲ್ಯವೆನಿಪ ಸಮ್ಯಗ್ ದರ್ಶನವಿಲ್ಲದೆ, ಸಮನಿಸದಾ ಸಮ್ಯಗ್ ದರ್ಶನಂ! ಇದೆಲ್ಲವೂ ಕೂಡದೆ, ನಿರಂತರ ಸುಖದ ಆದಿಯೆನಿಸುವ, ಮುಕ್ತಿಶ್ರೀಯು ಹೇಗೆ ಲಭಿಸುವುದು? ಕಣ್ಣಿಲ್ಲದೆ ನೋಡುವೆನೆಂಬ, ಮಣ್ಣಿಲ್ಲದೆ ಕೃಷಿಯಂ ಮಾಡುವೆನೆಂಬ, ತೂಬಿಲ್ಲದೆ ಕೆರೆಯಂ ಕಟ್ಟುವೆನೆಂಬ, ಕಾಲಿಲ್ಲದೆ ನಡೆವೆನೆಂಬ, ಸತಿಯಿಲ್ಲದೆ ಸುತರಂ ಪಡೆವೆನೆಂಬ, ಅಂಬಿಲ್ಲದೆ ಬಿಲ್ಮಿಡಿವೆನೆಂಬ, ಕಿವಿಯಿಲ್ಲದೆ ಕೇಳ್ವೆನೆಂಬ ಸವಿಯಿಲ್ಲದುಣ್ಬೆನೆಂಬ, ಬಾಗಿಲಿಲ್ಲದೆ ಪೋಪೆನೆಂಬ, ನಾಲಿಗೆಯಿಲ್ಲದೆ ನುಡಿವೆನೆಂಬ ಬರಿ ಹೆಡ್ಡ ಅತಿದಡ್ಡನಂತಾಗಬಹುದು ಎನ್ನುತ್ತಾನೆ ನಯಸೇನ. ಅಂದರೆ—ಮನೋವಾಕ್ಕಾಯಗಳಿಂದ ಪರಿಶುದ್ಧ

ನಾಗಿ ಸದ್ಧರ್ಮದಲ್ಲಿ ನಿರತನಾಗಿ, ಕಾರ್ಯವನ್ನೆಸಗದೆ, ಪರಮಾತ್ಮನಲ್ಲಿ ಭಕ್ತಿಯನ್ನಿಡದೆ, ಧರ್ಮದಲ್ಲಿ ಶ್ರದ್ಧೆಯಿಲ್ಲದೆ, ಶಾಶ್ವತ ಸುಖವಂ ಕೊಡುವ ಮುಕ್ತಿಯನ್ನು ಮಾತ್ರ ಅಪೇಕ್ಷಿಸಿದರೆ, ನಾಲಿಗೆಯಿಲ್ಲದೆ ನುಡಿವೆನೆಂಬ ನಟನೆಯನ್ನು ನಟಿಸುವ ಗೊಡ್ಡ ಪೆದ್ದನಂತಾದೀತು ಎಂಬುದೇ ಕವಿಯ ವಿವರಣೆ. ಮೋಕ್ಷವಂ ಪಡೆಯಲು ಶುದ್ಧವಾದ ಕರಣ, ಧರ್ಮಶ್ರದ್ಧೆ, ದೈವಭಕ್ತಿ ಇವುಗಳಿರಬೇಕು. ಹಾಗಿದ್ದರೆ ಮಾತ್ರ, ಮೋಕ್ಷ ಬಹು ಸುಲಭ—ಎಂದು ನಯಸೇನನ ಅಭಿಪ್ರಾಯ.

ದರ್ಶನವೆಂದರೇನು? ಎಂಬುದಕ್ಕೆ "ಅಗಮುಮಿಳಾ ಲೋಕೈಕಪೂಜ್ಯಂ, ತದಾಗಮದೊಂದರ್ಥಮೆ ತತ್ವಮೆಂದು, ನಯದಿಂ ನಂಬಿರ್ಪುದುತ್ತಮ ಸೌಖ್ಯಾನ್ವಿತರಪ್ಪ ನಿರ್ವೃತಿನುತ ಶ್ರೀ ಸ್ಪರ್ಶನಂ ದರ್ಶನಂ!" ಎನ್ನುತ್ತಾನೆ, ಸುಕವಿಜನ ಮನಃಪದ್ಮನೀರಾಜಹಂಸ!

ನಯಸೇನನಿಗೆ, ಜೀವನದ ನಾನಾ ಮುಖಗಳ ಪರಿಪಕ್ವ ಅನುಭವವಿದ್ದಿತೆಂದು, ಆತನು ಉಪಯೋಗಿಸಿರುವ ಉಪಮಾನ ಮತ್ತು ನಾಣ್ನುಡಿಗಳಿಂದ ಚೆನ್ನಾಗಿ ತಿಳಿದುಬರುತ್ತಿದೆ.

ಪುತ್ರರಿಲ್ಲದ ಮನೆವಾರ್ತೆ, ಪ್ರೀತಿಯಿಲ್ಲದ ನಿಜಪತ್ನಿ, ಸತ್ವದಯೆಯಿಲ್ಲದ ಧರ್ಮವುದೊಪ್ಪಲಾರ್ಕುಮೇ? ಪರಿಮಳವಿಲ್ಲದ ತುಪ್ಪ, ಕೀರ್ತಿಯಿಲ್ಲದ ದೊರೆತನ, ಮೋಹ ಪ್ರೀತಿಯಿಲ್ಲದ ಬಾಳು, ಭಕ್ತಿಯಿಲ್ಲದ ಕೊಂಡಾಟ, ಶಕ್ತಿಯಿಲ್ಲದ ಸೆಣಸಾಟ, ಅರಸಿಲ್ಲದೂರು, ಒಡೆಯನಿಲ್ಲದ ಮನೆ, ಫಲವಿಲ್ಲದ ತೋಟ, ಕುಲವಿಲ್ಲದ ಮಹಿಮೆ, ಬೆಂಕಿಯಿಲ್ಲದಡುಗೆ, ಮೆಚ್ಚಿಗೆಯಿಲ್ಲದ ಮಡದಿ, ದಯೆಯಿಲ್ಲದ ಕೀರ್ತಿ, ನಯವಿಲ್ಲದ ಸೇವೆ, ಗಂಡನಿಲ್ಲದ ಸತಿ, ಮದವಿಲ್ಲದಾನೆ, ನೀರಿಲ್ಲದ ಕೊಳ, ತುಪ್ಪವಿಲ್ಲದೂಟ, ಸಮ್ಯಗ್‌ದರ್ಶನವಿಲ್ಲದ ದಾನ, ಜಪ, ತಪ ಮತ್ತು ಧರ್ಮ ಅದನ್ನು ಹೇಗೆ ಒಪ್ಪಬೇಕು? ಎಂದು ಪ್ರಶ್ನಿಸುತ್ತ, ಇದಕ್ಕೆ ಉತ್ತರವನ್ನೂ ಕವಿಯೇ ಕೊಟ್ಟಿರುವನು. ದೇಹಕ್ಕೆ ಅವಯವಗಳಿರುವಂತೆ, ವೃಕ್ಷಕ್ಕೆ ಶಾಖೆಗಳಿರುವಂತೆ, ಧರ್ಮಕ್ಕೆ ಅಷ್ಟಾಂಗದರ್ಶನ ಅತ್ಯಾವಶ್ಯಕವಾಗಿದೆ. ಪಂಚಾಣುವ್ರತಗಳನ್ನೂ ಆಚರಿಸಬೇಕಾಗಿದೆ ಎಂಬುದಾಗಿ ನಿರೂಪಿಸಿರುವನು, ನಯಸೇನ.

ನಯಸೇನನ ಈ ಮೇಲಿನ ಉಪಮಾನಗಳನ್ನು ನೋಡಿದಾಗ,

"ವಿನಯೇನ ವಿನಾಕಾ ಶ್ರೀಃ ಕಾನಿಶಾಶಶಿನಾ ವಿನಾ—
ರಹಿತಾ ಸತ್ಕವಿತ್ವೇನಕೀದೃಶೀ ವಾಗ್ವಿದಗ್ಧತಾ" ಎಂಬ ಪೂರ್ವಿಕರ ಉಕ್ತಿಯೂ ನೆನಪಿಗೆ ಬರುವುದು.

ನಯಸೇನನ ಉಪಮಾನಗಳು, ಜನಸಾಮಾನ್ಯರಿಗೆ ಕೂಡ ಬಹು ಸುಲಭವಾಗಿ ಅರ್ಥವಾಗುವಂತೆ ಇರುತ್ತವೆ.

ಬೆಳಗಿನೊಳ್ ಕಾಣದು ನಿಶಿ
ಯೊಳ್ ಕಾಣ್ಬುದು ಪೆಗ್ಗಣಕ್ಕೆ ನಿರ್ಗುಣರ್ಗಂತು
ಜ್ವಳ ಧರ್ಮವನರಿಯದೆ ಯು
ಮ್ಮಳಮಂ ಪೊರ್ದುವದು ಜಡರ್ಗೆ ಸಹಜಮೆನಿಕ್ಕುಂ।

ಗೂಬೆಗೆ ಹಗಲಿನ ಬೆಳಕಿನಲ್ಲಿ ಹೇಗೆ ಕಣ್ಣು ಕಾಣಿಸುವುದಿಲ್ಲವೋ ಹಾಗೆಯೇ, ಗುಣಹೀನರಿಗೆ ಉಜ್ವಲವಾದ ಧರ್ಮದ ಅರಿವಾಗುವುದಿಲ್ಲ. ಹೆಗ್ಗಣಕ್ಕೆ ಕಾಳರಾತ್ರಿಯಲ್ಲಿ ಮಾತ್ರ ಕಣ್ಣು ಕಾಣಿಸುವಂತೆ, ಗುಣಹೀನರಿಗೆ ಅಧರ್ಮದ, ಅಜ್ಞಾನದ ದಾರಿಯೇ ಕಾಣುತ್ತದೆ. ಗೂಬೆ, ಹೆಗ್ಗಣಗಳು ಶುಭ್ರವಾದ ಹಗಲ ಬೆಳಕನ್ನು ನೋಡಿ, ಉಮ್ಮಳಪಡುವಂತೆ, ದುಷ್ಟರಾದವರು, ಉಜ್ವಲ ಧರ್ಮವನ್ನರಿಯದೆ, ಉಮ್ಮಳಪಡುವರು. ಇದು ಅಂತಹ ಜಡಮತಿಗಳಿಗೆ ಸಹಜವಾದುದು ಎಂಬುದಾಗಿ, "ದರ್ಶನದ ಕಥೆ"ಯಲ್ಲಿ ಬರುವ ಸೆಟ್ಟಿಯ ನೇಮನಿಷ್ಠೆ, ಸವಣರ ಕುರಿತಾದ ಅಭಿಮಾನವನ್ನು ಕಂಡು ಹೇಸಿಕೆಪಟ್ಟ ಬ್ರಾಹ್ಮಣ ವಸುಭೂಪತಿಯು, ಜೈನಧರ್ಮವನ್ನು ಮೆಚ್ಚದೆ ಅಪಹಾಸ್ಯ ಮಾಡಿದಾಗ, ಈ ಮೇಲಿನ ಉದಾಹರಣೆಗಳಿಂದ ವಸುಭೂಪತಿಯಂಥವರ ಸ್ವಭಾವವನ್ನು ವ್ಯಕ್ತಪಡಿಸಿರುವನು, ಸುಕವಿನಿಕರ ಪಿಕಮಾಕಂದ ನಯಸೇನ.

ದಾನ ಧರ್ಮ, ಪೂಜೆ, ಇವುಗಳ ಸತ್ಫಲ ಕೂಡಲೇ ಲಭಿಸುವಂತಹುದಲ್ಲ. ಆದರೆ, ಸ್ವಲ್ಪ ಕಾಲ ಕಳೆದ ಬಳಿಕ ಲಭಿಸಬಹುದಾದ ಆ ಫಲವು ನಿರಂತರವೂ ಶ್ರೇಷ್ಟವೂ ಆದುದು ಎಂಬುದಕ್ಕೆ—

"ಸಸಿಯಂತೆ ಕಾಂಗಿನ ಕೆಂಗಿನ
ಸಸಿಯುಂ ನೆರೆ ಬೆಳೆದು ಮೇಲೆ ಫಲಮಂ ಕುಡುವಂ
ತೆಸಮಂತು ಧರ್ಮಮುಂ ಮೇಲೆಯ್ದೆ ಕೊಡುಗು—ಕ್ರಮದಿಂದಂ"

ಎಂದು ಹೇಳಿ ನಿಜಚಿತ್ರವೊಂದನ್ನು ಚಿತ್ರಿಸಿರುವನು. ನಯಸೇನನ ಹೇಳಿಕೆಯು ಅರ್ಥಗರ್ಭಿತವೂ ಸಹಜವೂ ಆದುದಾಗಿದೆ.

ನಯಸೇನನು ಸಮಾಜಕ್ಕೆ ನೀತಿಪಾಠವನ್ನು ಬೋಧಿಸಿರುವನು. ಕಾಲ, (೧೧೧೨ರಲ್ಲಿ) ಹೇಳಿದ ಆತನ ವಾಕ್ಯಗಳು ತ್ರಿಕಾಲಾಬಾಧಿತವಾಗಿವೆ. ಇದನ್ನು ಮನಗಂಡರೆ, ಈ ಕವಿಯ ಪ್ರತಿಭೆ ಮತ್ತು ಕಾವ್ಯರಚನಾಶಕ್ತಿ ಎದ್ದು ಕಾಣಿಸುವುದು.

"ಬಂಧುಗಳೇ, ಅತಿ ಆಸೆಯಿಂದ ಧನಸಂಪಾದನೆಗಾಗಿ ಏಕೆ ಹೆಣಗುವಿರಿ? ನೀವು ಮಾಡಿದ ದಾನ, ಧರ್ಮಗಳ ಪುಣ್ಯಪ್ರಭಾವವು ನಿಧಿಯಂತೆ ನಿಮ್ಮಲ್ಲಿ ತುಂಬಿಕೊಂಡಿರುವುದಾದರೆ, ತಾನಾಗಿ ಮಳೆಬಂದು, ಕೆರೆ ತೊರೆಗಳು ಸಹಜವಾಗಿ ತುಂಬಿಕೊಳ್ಳುವಂತೆ, ನಿಮ್ಮಲ್ಲಿ ಸಂಪತ್ತು ತಾನಾಗಿ ಬಂದು ಸೇರುವುದು'' ಎಂದು ನುಡಿದಿರುವನು.

"ಮಾನವ'' ಎಂದ ಮಾತ್ರಕ್ಕೆ, ಗುಣದಿಂದ, ಧರ್ಮದಿಂದ, ಮಾನವತೆಯಿಂದ ಎಲ್ಲರೂ ಮನುಷ್ಯರೆಂದೆನಿಸಿಕೊಳ್ಳಲು ಯೋಗ್ಯರಾಗುವುದಿಲ್ಲ. ಹೇಗೆಂದರೆ—

"ಮರನೆಂಬೀ ಪೆಸರೆಲ್ಲಾ<br>ಮರಗಳ್ಗಂ ಕಾಂ ಸಮಾನಮನಿತರೊಳೆಲ್ಲಾ<br>ತರುಗಳ, ಪಣ್ಣುಂ ಪೆಸರಂ<br>ತಿರೆ ಗುಣಮು ಸಮಾನಮಾಗಲರಿಗುಮೆ ಸವಿಯೊಳ್

ಎಲ್ಲಾ ಮರಗಳಿಗೂ ಹೆಸರು ಒಂದೇ ಇದ್ದರೂ, ಅವುಗಳ ಹಣ್ಣುಗಳಿಗೂ— ಹಣ್ಣು ಎಂಬ ಒಂದೇ ಹೆಸರಿದ್ದರೂ ಆ ಹಣ್ಣುಗಳ ಗುಣಧರ್ಮ ಒಂದೇ ವಿಧವಾಗಿರುವುದೇ? ಕೆಲವು ಸಿಹಿಯಾಗಿ ಮತ್ತೆ ಕೆಲವು ಕಹಿಯಾಗಿ ಇರುವುದಿಲ್ಲವೇ? ಅಂತೆಯೇ ಮನುಷ್ಯವರ್ಗದವರೂ ಸಹ! ಎನ್ನುತ್ತಾನೆ ಕವಿ ನಯಸೇನ. ಎಂತಹ ಉದಾಹರಣೆಯಿದು!

"ಸತ್ಪುರುಷಂ ಪರವನಿತೆಗೆರಗೆ ಪರವೂ ಅನಿತೆವೇಂ!'' ಸತ್ಪುರುಷನು ಪರಸ್ತ್ರೀಗೆ ಮರುಳಾಗಬಾರದು. ಹಾಗೆ ಮರುಳಾಗಿ ಮೋಹಗೊಂಡ ಪಕ್ಷದಲ್ಲಿ ಇಹದಲ್ಲೂ ಸುಖವಿಲ್ಲ! ಪರದಲ್ಲೂ ಇಲ್ಲ! ಸ್ವಾರಸ್ಯವಾದ ನುಡಿಯಿದು.

ಪೂರ್ಣಾಯುಷ್ಯವೂ, ವಿದ್ಯೆಯೂ, ಸತ್ಕೀರ್ತಿಯೂ, ಪತ್ನಿಯ ಪ್ರೀತಿಯೂ, ಅಗಾಧವಾದ ಧೈರ್ಯ, ಸುಂದರವಾದ ರೂಪವೂ ಇದೆಲ್ಲ ಹೇಗೆ ಲಭಿಸುವುದು ಎಂಬುದಕ್ಕೆ ಕವಿ ನಯಸೇನನು—"ಇದೆಲ್ಲಂ ಸದ್ಧ್ಯಾನದಿಂದಂ ನರರ್ಗೆ ಸಮನಿಕುಂ ಸಂತತೋತ್ಸಾಹದಿಂದಂ'' ಎಂದು ಹೇಳಿರುವನು.

ಕುಲಕ್ಕಿಂತಲೂ ಧರ್ಮವೇ ಶ್ರೇಷ್ಠ ಹೇಗೆ? ಎಂಬುದಕ್ಕೆ ನಯಸೇನನ ವಿವರಣೆ ನೋಡಿರಿ—

"ಪೊಲೆಯರ್ ಭಾವಿಸುವೊಡೆ ದು
ಷ್ಕುಲರನುಪಮ ಶುದ್ಧ ವೃತ್ತಿಯೊಳ್ ನಡೆವೊಡೆ ಭೂ
ತಲವೆಲ್ಲಂ ಬಣ್ಣಿಪುದೈ
ಕುಲದಿಂದಂ ಧರ್ಮಮಧಿಕಮೆಂದರಿಪುವವೋಲ್

"ಕುಲಮುಳ್ಳಂ ಚಾರಿತ್ರ್ಯ
ಕ್ಕಲಸಿ ಮಹಾವ್ಯಸನಿಯಾಗಿ ನಡೆವೊಡೆ ಧರಣೀ
ವಲಯಂ ಮುನಿವುದು ಧರ್ಮಂ
ಕುಲದಿಂದಂ ಪೂಜ್ಯಮೆಂದು ಸಾರುವ ತೆರದಿಂ''

"ಹರಿಶ್ಚಂದ್ರ ಕಾವ್ಯ"ದಲ್ಲಿಯೂ, ಹೀಗೆಯೇ "ಅತಿ ಹುಸಿವ ಯತಿ ಹೊಲೆಯ, ಹುಸಿಯದಿಹನುನ್ನತ ಯತಿವರನು" ಎಂಬುದಾಗಿ ಹೇಳಿದೆ. ಕುಲಕ್ಕಿಂತಲೂ ಧರ್ಮ ಮತ್ತು ಆಚರಣೆಯೇ ಶ್ರೇಷ್ಠವಾದುದು. ಸತ್ ಧರ್ಮ ಸದಾಚರಣೆಗಳಿಂದ ಹೊಲೆಯನೂ ಉತ್ತಮನಾಗಿ ಪ್ರಶಂಸಿಸಲ್ಪಡುವನು.

"ಇರಣದೊಳೊಗೆದುಂ ಲವಣಂ, ವರಮೆನಿಕುಂ ಕ್ಷೇತ್ರದಲ್ಲಿ ಬೆಳೆದಾನೆಲ್ಗಂ ಪಿರಿದುಂ ಕಲ್ತರಿದವರಾದರಣೀಯರ್, ಹೀನಕುಲದೊಳೊಗಡೊಡೆ ಮಿಳಿಯೋಳ್." ಉಪ್ಪು ತಯಾರಿಸುವ ಸ್ಥಳದಲ್ಲಿದ್ದ ಉಪ್ಪು ಕೆಸರಿನ ಗದ್ದೆಯಲ್ಲಿ ಬೆಳೆದ ಬತ್ತ ಇವು ಹೇಗೆ ಶ್ರೇಷ್ಠವಾಗಿರುವುವೋ ಹಾಗೆಯೇ, ತುಂಬಾ ಓದಿ ಜ್ಞಾನಸಂಪನ್ನನಾದ ವ್ಯಕ್ತಿಯು, ಹೀನ ಕುಲೋತ್ಪನ್ನನಾಗಿ, ಹೀನ ಕುಲದಲ್ಲೇ ಇದ್ದರೂ ಪೂಜಿಸಲ್ಪಡುವನು! ಉತ್ತಮ ಕುಲೋತ್ಪನ್ನನಾದವನು, ಧರ್ಮಕರ್ಮಾಚರಣೆಗಳಲ್ಲಿ ಅಧಮನಾಗಿ ಜ್ಞಾನಸಂಪನ್ನನಾಗಿದ್ದರೂ, ಅವನು ಅಧಮನೆಂದೆಣಿಸಲ್ಪಟ್ಟು ದೂರೀಕರಿಸಲ್ಪಡುವನು. ಇಂತು ಕುಲಕ್ಕಿಂತಲೂ ಧರ್ಮವೇ ಶ್ರೇಷ್ಠ, ಜ್ಞಾನವೇ ಪವಿತ್ರ ಆಗಿರುವುದು.

ಸದ್ಧರ್ಮ—ನೀತಿಗಳು ಜ್ಞಾನಿಯಾದವನಿಗೆ ಮಾತ್ರ ಗೋಚರಿಸುವು ದಲ್ಲದೆ, ನರಕ ದುಃಖಂಗಳನ್ನನುಭವಿಸುತ್ತಿರುವ ಅಜ್ಞಾನಿಗೆ ಸದ್ಧರ್ಮದ ಮಹಿಮೆ ತಿಳಿಯಲಾರದು. ಹೇಗೆಂದರೆ—"ಕನ್ನಡಿಯಂ ತೋರ್ದೊಡೆ ಅತ್ಯನ್ತ ಸಲ್ಲಕ್ಷಣಂಗೆ ಮುನಿಸಾಗದು ಮೂಕೊರೆಯಂಗಾ ಕನ್ನಡಿಯಂ ತೋರ್ದೊಡೆ ಬಡಿವನಿರಿವಂ ಕೊಲ್ವಂ || ಅಂತು ವಿಷ್ಪಾಪಿಗೆ ಸದ್ಧರ್ಮಂ ರುಚಿಯಾಗಿರ್ಕುಂ, ಮಹಾಪಾತಕಿಗೆ ಕೈಪೆಯಾಗಿರ್ಕುಂ" ಎಂಬುದಾಗಿ ನಯಸೇನನು ಅಂದವಾಗಿ ಹೇಳಿರುವನು.

## ಪದ್ಯಭಾಗದ ಕಥೆಗಳ ಸಾರಾಂಶ

### ದರ್ಶನದ ಕಥೆ

ಪ್ರಥಮಾಶ್ವಾಸದಲ್ಲಿ ಬರುವ ದರ್ಶನ ಕಥೆಯಲ್ಲಿ ವಸುಭೂಪತಿಯೆಂಬೊಬ್ಬ ಬ್ರಾಹ್ಮಣನಿಗೂ ಓರ್ವ ಜೈನ ಧರ್ಮಿಯ ಸೆಟ್ಟಿಗೂ ಮಿತ್ರತ್ವವೇರ್ಪಟ್ಟು, ಸೆಟ್ಟಿ ವ್ಯಾಪಾರಕ್ಕೂ ಭಟ್ಟರು ಗಂಗಾಸ್ನಾನಕ್ಕೂ ಒಟ್ಟಿಗೆ ಹೊರಡುತ್ತಾರೆ. ಜೈನಧರ್ಮಿಯ ಸೆಟ್ಟಿಯು, ಸಾಧುಸಂತರ ಮೇಲೆ ಇಟ್ಟಿರುವ ಅಭಿಮಾನವನ್ನು ಕಂಡ ಬ್ರಾಹ್ಮಣನು, ಸೆಟ್ಟಿಯ ಧರ್ಮವನ್ನು ನಿಂದಿಸುತ್ತಾನೆ.

ಪಿತ್ತವಡರಿದವರಿಗೆ ಕೂಡಲೇ ಹಾಲುಕೊಟ್ಟರೆ, ಅಜೀರ್ಣವಾಗುವಂತೆ ಈ ವಸುಭೂಪತಿಗೆ ಒಡನೆಯೇ ಧರ್ಮಬೋಧೆ ಮಾಡಿದರೆ. ಪರಿಣಾಮಕರವಾಗದೆಂದು ತಿಳಿದ ಸೆಟ್ಟಿಯು, ಕೆಲವು ದಿನಗಳ ಬಳಿಕ, ಒಂದುಪಾಯ ಹೂಡಿ, "ನೋಂಪಿ" ಎಂಬ ಒಂದು ವ್ರತಕ್ಕೆ ಆ ಬ್ರಾಹ್ಮಣನನ್ನು ಉಬ್ಬಿಸಿ, ದಕ್ಷಿಣೆ ತುಂಬಾ ಕೊಡುವೆನೆಂದು ಆಸೆ ತೋರಿಸಿ, ಆ ವ್ರತದ ದೀಕ್ಷೆಯನ್ನು ಸ್ವೀಕರಿಸುವಂತೆ ಮಾಡಿದನು. ಕೈತುಂಬಾ ದಕ್ಷಿಣೆ ಸಿಗುವುದೆಂದು ಭಾವಿಸಿದ್ದ ಬ್ರಾಹ್ಮಣನನ್ನು ಸೆಟ್ಟಿಯು, ತನ್ನ ವ್ರತದ ಕಠೋರ ನಿಯಮಗಳಿಗೊಳಪಡಿಸಿ ಕಷ್ಟಪಡಿಸುತ್ತಾನೆ. ತಲೆಯ ಒಂದೊಂದೇ ಕೂದಲನ್ನು ಕಿತ್ತು ತೆಗೆದು, ತಲೆ ಬೋಳುಮಾಡಿ, ಕ್ಷೀರಘೃತದಧ್ಯಾನ್ನ, ಹೋಳಿಗೆ ಇತ್ಯಾದಿಗಳನ್ನೇ ಆ ಬ್ರಾಹ್ಮಣ ಊಟಮಾಡಬೇಕಾಗಿತ್ತು. ಒಂದು ತೊಟ್ಟು ನೀರು ಕುಡಿಯದೆ, ಹೊರಗೆ ಎಲ್ಲಿಯೂ ತಿರುಗಾಡದೆ, ವಸು-

ಭೂಪತಿಯು ಈ ನಿಯಮಗಳನ್ನು ಎರಡು ತಿಂಗಳ ಕಾಲ ಪಾಲಿಸ ಬೇಕಾಗಿತ್ತು.

ಇಂತಹ ಕಠೋರ ವ್ರತ ನಿಯಮಗಳು ಆರಿಗೆ ಸಾಧ್ಯ? ಬ್ರಾಹ್ಮಣನು ಬಾಯಾರಿಕೆಯಿಂದ ಬಳಲಿ ಕೆಲವೇ ದಿನಗಳಲ್ಲಿ ಶಕ್ತಿಗುಂದಿದನು. ಆಗ ಸೆಟ್ಟಿ ತನ್ನ ಕಾರ್ಯಸಾಧನೆ ಮಾಡಿಕೊಳ್ಳುತ್ತಾನೆ. ಹೇಳುತ್ತಾನೆ—

"ನೀವು ಈ ಒಂದು ವ್ರತವನ್ನು ಆಚರಿಸಲಸಮರ್ಥರಾದರೆ, ಇನ್ನು ಜೈನಧರ್ಮದ ದೊಡ್ಡ ದೊಡ್ಡ ವ್ರತಗಳನ್ನು ಆಚರಿಸುವುದು ಹೇಗೆ? ಎಂದು ಅಣಕಿಸಲು, ವಸುಭೂಪತಿಗೆ ನಾಚಿಕೆಯಾಗಿ ಜೈನ ಧರ್ಮದಲ್ಲಿ ಶ್ರದ್ಧೆ ಹುಟ್ಟುವುದು.

ಕೊನೆಗೆ ಬ್ರಾಹ್ಮಣನು ಜೈನಧರ್ಮಾವಲಂಬಿಯಾಗಿ, ಸಂಸಾರದಲ್ಲಿ ಹೇಸಿಗೆಪಟ್ಟು ಸನ್ಯಾಸಿಯಾಗಿ ಜಿನಪದವನ್ನು ಸೇರಿ ಮೋಕ್ಷಹೊಂದುತ್ತಾನೆ ಎಂಬುದು ದರ್ಶನ ಕತೆಯ ಸಾರಾಂಶ.

## "ನಿಶ್ಯಂಕೆ"ಯ ಕಥಾಸಾರಾಂಶ

ವಿಜಯಪುರದ ರಾಜನಿಗೆ ಸೌಂದರಿಯೆಂಬ ತನ್ನ ಪತ್ನಿಯಲ್ಲಿ ಲಲಿತಾಂಗನೆಂಬ ಓರ್ವ ಪುತ್ರನು ಜನಿಸಿದನು. ಓರ್ವನೇ ಪುತ್ರನಾದುದರಿಂದ ಈತನ ಲಾಲನೆ, ಪಾಲನೆ, ಬಹಳ ಚೆನ್ನಾಗಿ ನಡೆಯಿತು. ಲಲಿತಾಂಗನು ದೊಡ್ಡವನಾಗಿ, ಮದವೇರಿದ ಮದ್ದಾನೆಯಂತೆ ಜವ್ವನಿಗನಾದನು.

ಸದ್ಗುಣಸಂಪನ್ನನಾದ ರಾಜನ ಪುತ್ರನು, ದುರ್ಗುಣಸಂಪನ್ನನಾಗಿ ರಾಜ್ಯದಲ್ಲೆಲ್ಲ ಉಪಟಳಮಾಡಲಾರಂಭಿಸಿದನು. ಬಾಲ್ಯದಲ್ಲಿ ಅತಿಯಾಗಿ ಮುದ್ದಿಸಿದುದೇ ಲಲಿತಾಂಗನ ಈ ಉಪಟಳಕ್ಕೆ ಕಾರಣವಾಯಿತು. ಪುರಜನರನ್ನು ಹೊಡೆಯುವುದು, ಮನೆಮನೆ ನುಗ್ಗಿ ಲೂಟಿಮಾಡುವುದು ಇತ್ಯಾದಿಗಳನ್ನು ನಡೆಸುತ್ತಿದ್ದನಾದರೂ ಮಗನ ಮೇಲಿನ ಮೋಹದಿಂದ ರಾಜನು ಆತನನ್ನು ತಡೆಯಲಿಲ್ಲ.

ದುರ್ಗುಣಗಳ ವೃದ್ಧಿಗೆ ಹೆಚ್ಚು ಕಾಲ ಬೇಕಾಗಿಲ್ಲವೆಂಬಂತೆ ಲಲಿತಾಂಗನು ಬರುಬರುತ್ತ ಸೂಳೆಗೇರಿಗೆ ನುಗ್ಗಿ, ದಾಂಧಲೆ ನಡೆಸುತ್ತ, ಮಾನವತಿಯರ ಮನೆಗೂ ನುಗ್ಗಿ ಮಾನವತಿಯರ ಮಾನಹರಣ, ಪ್ರಾಣಹರಣ

ಮಾಡುವುದಕ್ಕೂ ಹಿಂಜರಿಯದವನಾದನು. ಪುರಜನರು ಈತನ ಹಿಂಸೆಯನ್ನು ತಾಳಲಾರದೆ, ಕಣ್ಣೀರ್ಗರೆಯುತ್ತ ರಾಜನಲ್ಲಿ ದೂರುಕೊಟ್ಟರು.

ರಾಜನಿಗೆ ತನ್ನ ಪುತ್ರನ ತಪ್ಪಿನ ಅರಿವಾಯಿತು. "ಲಾಲಯೇತ್ ಪಂಚವರ್ಷಾಣಿ ದಶವರ್ಷಾಣಿ ತಾಡಯೇತ್" ಎಂಬ ಅನುಭವೋಕ್ತಿಯಂತೆ ನಡೆಯದಿದ್ದುದೇ ಈ ದುರ್ಗತಿಗೆ ಕಾರಣವಾಯಿತೆಂದೂ, ತನ್ನ ಕೀರ್ತಿಗೆ ಕಳಂಕಬಂದಿತೆಂದೂ, ಬಹು ನೊಂದುಕೊಂಡ ಆ ರಾಜನು, "ತುಪ್ಪದ ಮಡಕೆಯ ಮೇಲೆ ಕುಳಿತಿರುವ ಇಲಿಯನ್ನು ಹೇಗೆ ಓಡಿಸುವುದು?"ಎಂಬಂತೆ ಉಭಯಸಂಕಟಕ್ಕೊಳಗಾದನು.

"ಹೊಡೆದರೆ ಒಡೆಯುವುದು ಗಡಿಗೆ! ಹೊಡೆಯದಿದ್ದರೋ ತುಪ್ಪ ಹರಿಯುವುದು ಹೊರಗೆ" ಎಂಬ ಈ ಸಮಸ್ಯೆಯಲ್ಲಿ ಸಿಕ್ಕಿದ ರಾಜನು, ಕೊನೆಗೆ ಮಗನನ್ನು ಕರೆಸಿ, ಬುದ್ಧಿವಾದ ಹೇಳಿದನು. ಆದರೆ ಮಗ ಬಗ್ಗಲಿಲ್ಲ. ರಾಜ ಜಗ್ಗಲಿಲ್ಲ. ಇದರ ಫಲವಾಗಿ ಲಲಿತಾಂಗನಿಗೆ ದೇಶೋಚ್ಚಾಟನೆಯಾಯಿತು.

ರಾಜ್ಯದಿಂದ ಹೊರಬಿದ್ದ ಆತನು, ನೇಪಾಳಕ್ಕೆ ಹೋಗಿ, ಅದೃಶ್ಯ ಯಕ್ಷಿಣೀ ವಿದ್ಯೆಯಂ ಕಲಿತು, ಚೋರಶಿಖಾಮಣಿಯಾಗಿರಲ್, ಅಲ್ಲಿ ಸುಂದರಿಯಾದ ಸೂಳೆಯೊಬ್ಬಳು ಆತನಿಗೆ ಗಂಟುಬಿದ್ದಳು! ಅವಳು ಅಪೇಕ್ಷಿಸುತ್ತಿದ್ದುದೆಲ್ಲವನ್ನೂ ಆತನು ತಂದೀಯುತ್ತಿರಲು, ಅತಿಯಾಸೆಯುಳ್ಳ ಆ ವೇಶ್ಯೆ ಆ ದೇಶದ ರಾಜನ ರಾಣಿಯ ಕೊರಳ ವಜ್ರಹಾರವನ್ನು ಬಯಸಿದಳು. ಅದೃಶ್ಯ ವಿದ್ಯೆಯಂ ಬಲ್ಲ ಲಲಿತಾಂಗನು, ಹಾರವನ್ನು ಕದಿಯಲು ಹೋದಾಗ, ಆತ ಅಲ್ಲಿಯ ಕಾವಲುಗಾರರಿಗೆ ಕಾಣಿಸದಿದ್ದರೂ, ಹಾರವನ್ನು ಕದ್ದು ತರುವಾಗ ಆ ವಜ್ರದ ಕಾಂತಿ, ಅವರಿಗೆ ಕಾಣಿಸತೊಡಗಿತು. ಕಣ್ಮರೆಯಾಗಿರುವ ಕದ್ದವನು, ಆ ವಜ್ರಕಾಂತಿಯೊಡನೆ ಓಡುತ್ತಿರುವುದನ್ನು ತಿಳಿದ ಆ ಕಾವಲುಗಾರರು, ಕಳ್ಳನ ಬೆನ್ನಟ್ಟಿ ಹೋದರು. ಕಾವಲುಗಾರರ ಕೈಗೆ ಸಿಕ್ಕುವುದಕ್ಕಿಂತ ಸಾಯುವುದೇ ಲೇಸೆಂದು ಬಗೆದ ಲಲಿತಾಂಗನು ಓಡುತ್ತಿರಲು, ಅವನಿಗೆ ಮುಂದೆ ಒಂದು ದೃಶ್ಯ ಕಂಡುಬಂದಿತು.

ಹರಿತವಾದ ಕತ್ತಿಗಳನ್ನು ಒಂದು ಹಗ್ಗದ ಮೂಲಕ ಜೋತುಬಿಟ್ಟು ಆವುದೋ ಸಿದ್ಧಿಗಾಗಿ ಅವುಗಳ ಮೇಲೆ ಎರಗಲು ಹವಣಿಸುತ್ತಿದ್ದ ಒಬ್ಬ

ಮನುಷ್ಯನು ಪ್ರಾಣಭಯದಿಂದ ಸುತ್ತಮುತ್ತಣ ಹಗ್ಗಗಳ ಮೇಲೆಯೇ ಹತ್ತಿ ಇಳಿಯುತ್ತಿರಲು ಇದನ್ನು ನೋಡಿದ ಲಲಿತಾಂಗನು "ತನ್ನ ಪ್ರಾಣವಾದರೂ ಹೋಗಲಿ" ಎಂದುಕೊಂಡು ಒಡನೆಯೇ ಹಾರಿ [illegible] ಕತ್ತಿಗಳ ಮೇಲೆ ಬಿದ್ದನು!

ಆದರೆ ಆಶ್ಚರ್ಯ! ಅವನು ಸಾಯುವ ಬದಲು, ಅವನಿಗೆ ಅಲ್ಲಿ ದೇವತೆಯೊಬ್ಬಳು ಪ್ರತ್ಯಕ್ಷಳಾಗಿ ಅನೇಕ ವರಗಳನ್ನಿತ್ತಳು!

ಇದು ಹೀಗೆಲ್ಲ ಹೇಗೆ ಆಯಿತು? ಎಂದು ಲಲಿತಾಂಗನು ಅಚ್ಚರಿಪಡುತ್ತಿರಲು, ಅಲ್ಲಿದ್ದ ಆ ಮನುಷ್ಯನು ಹೇಳಿದನು—"ನಿಶ್ಶಂಕೆಯುಳ್ಳ ಜನಪದ ಭಕ್ತಿಯಿಂದ ಇಂತಹ ಅನೇಕ ವರಗಳು ಪ್ರಾಪ್ತವಾಗುತ್ತವೆ!" ಎನ್ನಲು, ಲಲಿತಾಂಗನಿಗೆ ಜ್ಞಾನೋದಯವಾಯಿತು.

[illegible] ಬಳಿಕ ತಾನು ಮಾಡಿದ ಪಾಪಕೃತ್ಯಗಳಿಗಾಗಿ ಪಶ್ಚಾತ್ತಾಪಪಟ್ಟ ಲಲಿತಾಂಗನು ಜಿನಭಕ್ತನಾಗಿ, ಅನೇಕ ವರಗಳನ್ನು ಪಡೆದು ಧಾರ್ಮಿಕನಾದನು ಎಂಬುದು [illegible] ಕಥೆಯ ಸಾರಾಂಶ.

## ನಿಷ್ಕಾಂಕ್ಷೆಯ ಕಥಾ ಸಾರಾಂಶ

ಕೆಲವು ಮಂದಿ ಹುಡುಗರು ಸೇರಿಕೊಂಡು, ಗೊಂಬೆಗಳನ್ನಿಟ್ಟುಕೊಂಡು, ಹುಡುಗಿಯೊಬ್ಬಳಿಗೆ ಮದುವೆಯ ಆಟವಾಡಿಸುತ್ತಿದ್ದರು. ಆ ಹುಡುಗಿಯ ಹೆಸರು ಅನಂತಮತಿ. ಆಗ ದಾರಿಯಲ್ಲಿ ಬರುತ್ತಿದ್ದ ಪ್ರಿಯದತ್ತನೆಂಬೊಬ್ಬ ಜೈನ ಸನ್ಯಾಸಿಯು, [illegible] ಮದುವೆಯ ಆಟವನ್ನು ನೋಡಿ "ಏನೂ ಸಂಭ್ರಮವಿಲ್ಲದೆ ಇದೆಂತಹ ಮದುವೆ?'' ಎಂದು ಹಾಸ್ಯಮಾಡಿ, ಆ ಹುಡುಗಿಯನ್ನು ಬಸದಿಗೆ ಕರೆದುಕೊಂಡು ಹೋಗಿ, ಅಲ್ಲಿ ಸನ್ಯಾಸಿಯೊಬ್ಬನೊಡನೆ, "ಈಕೆಗೆ ಬ್ರಹ್ಮಚರ್ಯೆಯ ವ್ರತವನ್ನು ಕೊಡಿರಿ!" ಎಂದು ವಿನೋದಕ್ಕಾಗಿ ಹೇಳಿದನು. ಅವರೂ ಸಹ ವಿನೋದಕ್ಕೆಂದೇ "ನೀನು ಇಂದಿನಿಂದ ಬ್ರಹ್ಮಚಾರಿಣಿ!" ಎಂದು ಹೇಳಿಬಿಟ್ಟರು.

ವಿನೋದಕ್ಕಾಗಿ ಹೇಳಿದ [illegible] ಮಾತು ಹುಡುಗಿಯ ಎಳೆಯ ಹೃದಯಕ್ಕೆ ನಾಟಿತು. ಮುಂದೆ ಆ ಹುಡುಗಿ ಪ್ರಾಪ್ತವಯಸ್ಕಳಾಗಿ ಜವ್ವನಾಂಗಿಯಾದರೂ ಮದುವೆಗೆ ಒಪ್ಪಲಿಲ್ಲ. "ತಾನು ಬ್ರಹ್ಮಚಾರಿಣಿ" ಎಂದೇ ತೀರ್ಮಾನಿಸಿಕೊಂಡಳು.

ಸುಂದರಿಯೂ ಯೌವನಾಂಗಿಯೂ ಆದ ಅನಂತಮತಿಯನ್ನು ಕಂಡ ವಿದ್ಯಾಧರನೊಬ್ಬನು ಮೋಹಿಸಿ, ಎತ್ತಿಕೊಂಡು ಹೋದನು. ಆದರೆ ಈಕೆಯ ತಾಯಿ ಬೆನ್ನಟ್ಟಿ ಹೋದುದರಿಂದ, ಅವನಾಕೆಯನ್ನು ಬಿಟ್ಟುಕೊಟ್ಟನು. ಆ ಬಳಿಕ, ಎಷ್ಟೋ ಮಂದಿ ಯುವಕರು, ಅನಂತಮತಿಯನ್ನು ಮದುವೆಯಾಗಲು ಆಸೆಪಟ್ಟು ಪ್ರಯತ್ನಿಸಿದರು. ಅನಂತಮತಿಯನ್ನು ಎತ್ತಿಕೊಂಡು ಹೋಗಿ ಬಲಾತ್ಕರಿಸಿದರು. ಚಾಟಿಯಿಂದ ಹೊಡೆದರು. ಬಹು ವಿಧವಾದ ಆಸೆಗಳನ್ನು ತೋರಿಸಿ ನೋಡಿದರು. ಆದರೂ, ಆಕೆ ಮದುವೆಯಾಗಲೊಪ್ಪಲಿಲ್ಲ. ಕೊನೆಗೊಬ್ಬ ಕುಂಟಣಿಯು ಈಕೆಯನ್ನು ಅಪಹರಿಸಿ, ಸೂಳೆಯೊಬ್ಬಳಿಗೆ ಮಾರಾಟಮಾಡಿದಳು. ಸೂಳೆಯು ಅನಂತಮತಿಗೆ ವೇಶ್ಯಾವೃತ್ತಿಯ ಮಹತ್ವವನ್ನು—

ಪೊಸದುಡುಗೆ ನಿಚ್ಚನಿಚ್ಚಂ
ಪೊಸಗಂಡರ್ ಚೆಲ್ವರಪ್ಪ ಪೊಸವಸ್ತ್ರಂ ಭಾ
ವಿಸುವಂದು ಮೆಯ್ಸುಖರಂ ಭ
ಜಿಸೆ ಬೆಲೆವೆಣ್ಗಕ್ಕು ಮುಳಿದ ಸತಿಯುರ್ಗುಂಟೇ ॥

ಎಂಬುದಾಗಿ ಬೋಧಿಸಿದಳು. ಆದರೂ ಅನಂತಮತಿ ತನ್ನ ನಿರ್ಧಾರವನ್ನು ಸಡಲಿಸಲಿಲ್ಲ. ಮಹಾತ್ಮರ ಮನಸ್ಸು ವಿಚಲಿತವಾಗುವುದುಂಟೇ? ಕೊನೆಗೆ ಜಿನ ದೇವನನ್ನು ಪೂಜಿಸುತ್ತಲಿದ್ದ ಅನಂತಮತಿ, ಮಹಾದೇವಿಯಾಗಿ ಜನರಿಂದ ಪೂಜಿಸಿಕೊಳ್ಳುವವಳಾಗಿ, ಸಮಾಧಿಸ್ಥಳಾಗಿ, ಶರೀರವನ್ನು ತೊರೆದು ಮತ್ತೆ ದೇವಿಯಾಗಿ ಶೋಭಿಸುವಳು! ಎಂಬುದು ಈ ಕಥೆಯ ತಾತ್ಪರ್ಯ.

—ಮ। ವಿ॥

ಜನನಂ ಮೂಲವು ಮೃತ್ಯುವಿಂಗೆ ಸುಖತಾಂ ದುಃಖಕ್ಕೆ ಮೂಲಂ ಸುಭೋ
ಜನಮುಂದಾಹಕೆ ಕಾರಣಂ ಜಗದೊಳಂ ನಿಷ್ಕಾಂಕ್ಷೆ ಸೌಖ್ಯಪ್ರದಂ ।
ಧನದಾವೇಶಹ ಮಹಾಭಿಲಾಷೆಯದು ತಾಂ ನಿತ್ಯಂ ಕುಚಿಂತಾಪ್ರದಂ
ಮನವೇ ಕೇಳತಿಯಾಸೆ ಮೃತ್ಯು ತಿಳಿಯೈ ಶ್ರೀನೀಲಕಂಠೇಶ್ವರಾ ॥

ಸಂಪೂರ್ಣ.



Edited, Printed & Published by K. V. Shenoy
at The Prabhat Printers, Ltd., Mangalore.